

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1058 |
| ಸದಸ್ಯರ ಹೆಸರು | ಶ್ರೀ ಬಿ.ಕೆ.ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 29.09.2020. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿಗೆ ಕುಡಿಯುವ ನೀರೊದಗಿಸುತ್ತಿದ್ದ ತಿಪ್ಪಗೊಂಡನಹಳ್ಳಿ ಕೆರೆ (ಚಾಮರಾಜಸಾಗರ) ಮತ್ತು ಮಂಚನ ಬೆಲೆ ಡ್ಯಾಂ ಸುತ್ತಲೂ ಇರುವ ಬೆಟ್ಟ ಗುಡ್ಡಗಳಲ್ಲಿ ಜೆಲ್ಲಿ ಮತ್ತು ಎಂ-ಸ್ಯಾಂಡ್ ಉತ್ಪತ್ತಿಯ ಕಲ್ಲುಕ್ವಾರಿ ಕಲ್ಲುಗಣಿಯ ಕ್ರಷರ್ ಗಳು ಅಕ್ರಮವಾಗಿ ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶವು ಬೆಂಗಳೂರು ನಗರ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳಲ್ಲಿನ 1453 ಚದರ ಕಿಲೋಮೀಟರ್ ವ್ಯಾಪ್ತಿಯಲ್ಲಿ ಬರುತ್ತದೆ.<br>ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಿಗೆ ಸಂಬಂಧಿಸಿದಂತೆ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದಲ್ಲಿ ಅನಧಿಕೃತ ಕಲ್ಲುಗಣಿಗಾರಿಕೆ ನಡೆದಿರುವುದು ಕಂಡುಬಂದಿರುತ್ತದೆ.<br>ರಾಮನಗರ ಜಿಲ್ಲೆಯಲ್ಲಿ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದಲ್ಲಿ ಅನಧಿಕೃತ ಕಲ್ಲುಗಣಿಗಾರಿಕೆ ನಿರ್ವಹಿಸುತ್ತಿರುವ ಪ್ರಕರಣಗಳು ಕಂಡುಬಂದಿರುವುದಿಲ್ಲ. |
| ಆ) | ಡ್ಯಾಂಗಳ ಕನಿಷ್ಟ 10ಕಿ.ಮೀ. ಸುತ್ತ ಮುತ್ತ ಕಲ್ಲುಕ್ವಾರಿ ಕಲ್ಲುಗಣಿಗಾರಿಕೆ ನಿಷೇಧದ ಬಗ್ಗೆ ಸರ್ಕಾರದ ಮತ್ತು ನ್ಯಾಯಾಲಯದ ಆದೇಶಗಳು ಚಾಲನೆಯಾಗಿವೆಯೇ; | ಸರ್ಕಾರದ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯದ ಅಧಿಸೂಚನೆ ಸಂಖ್ಯೆ FEE 215 ENV 2000 ದಿನಾಂಕ 18.11.2003 ರಂತೆ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ವಲಯಗಳನ್ನು ಗುರುತಿಸಿದ್ದು, ವಲಯ-1ರಲ್ಲಿ ಹೊಸದಾಗಿ ಗಣಿಗಾರಿಕೆ ಮತ್ತು ಕ್ರಷರ್ ಕಾರ್ಯಾಚರಣೆಗೆ ನಿರ್ಬಂಧ ವಿಧಿಸಲಾಗಿದೆ.<br>ಅದರಂತೆ ಈ ಅಧಿಸೂಚನೆ ಜಾರಿಯಾಗುವ ಪೂರ್ವದಲ್ಲಿ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದಲ್ಲಿ ಮಂಜೂರು ಮಾಡಲಾಗಿದ್ದ, ಕಲ್ಲುಗಣಿ ಗುತ್ತಿಗೆಗಳನ್ನು ರದ್ದುಪಡಿಸಲಾಗಿದ್ದು, ಹೊಸದಾಗಿ ಕ್ರಷರ್ ಲೈಸೆನ್ಸ್ ಮತ್ತು ಕಲ್ಲುಗಣಿ ಗುತ್ತಿಗೆ ಮಂಜೂರಾತಿಯನ್ನು ನಿರ್ಬಂಧಿಸಿದೆ. |
| ಇ) | ಇಲ್ಲದಿದ್ದ ಪಕ್ಷದಲ್ಲಿ ಅಕ್ರಮವಾಗಿ ಗಣಿಗಾರಿಕೆಯನ್ನು ನಡೆಸುವವರ ವಿರುದ್ಧ ಸರ್ಕಾರವು ಯಾವ ಕ್ರಮಕೈಗೊಂಡಿದೆ? | ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಅಕ್ರಮ ಕಲ್ಲುಗಣಿಗಾರಿಕೆ / ಸಾಗಾಣಿಕೆ ನಡೆಸಿರುವ ಸಂಬಂಧ ಬೆಂಗಳೂರು ನಗರ ಜಿಲ್ಲೆ ವ್ಯಾಪ್ತಿಯಲ್ಲಿ 09 ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ ವ್ಯಾಪ್ತಿಯಲ್ಲಿ 04 ಮೊಕದ್ದಮೆಗಳನ್ನು ದಾಖಲಿಸಲಾಗಿರುತ್ತದೆ. |

ಸಂಖ್ಯೆ: ಸಿಐ 492 ಎಂಎಂಎನ್ 2020

(ಸಿ.ಸಿ. ಪಾಟೀಲ)

ಗಣಿ ಮತ್ತು ಭೂವಿಜ್ಞಾನ ಸಚಿವರು